# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 505

ಸದಸ್ಯರ ಹೆಸರು : ಶ್ರೀ ನಸೀರ್ ಅಹ್ಮದ್ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 16.12.2021

ಉತ್ತರಿಸಬೇಕಾದ ಸಚಿವರು : ಮಾನ್ಯ ಮುಖ್ಯಮಂತ್ರಿರವರು

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವತಿಯಿಂದ ನಿರ್ಮಾಣಗೊಂಡಿರುವ ಬನಶಂಕರಿ 6ನೇ ಹಂತದ 4ನೇ ಬ್ಲಾಕ್ (ಮುಂದುವರೆದ ಬಡಾವಣೆ) ಯಲ್ಲಿನ ಒಳಚರಂಡಿ ರಸ್ತೆ, ಕುಡಿಯುವ ನೀರಿನ ವ್ಯವಸ್ಥೆ ಕಲ್ಪಿಸಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ (ಬಿ.ಡಿ.ಎ) ವತಿಯಿಂದ ಮೀಸಲಾದ ಮೊತ್ತವನ್ನು ಬಿಡಬ್ಲ್ಯೂಎಸ್‌ಎಸ್‌ಬಿ ರವರಿಗೆ ಒದಗಿಸಲಾಗಿದೆಯೇ; (ವಿವರಗಳನ್ನು ಒದಗಿಸುವುದು) | ಬನಶಂಕರಿ 6ನೇ ಹಂತ ಹಾಗೂ ಮುಂದುವರೆದ ಬನಶಂಕರಿ 6ನೇ ಹಂತದ ಬಡಾವಣೆಗಳಿಗೆ ಕಾವೇರಿ ಕುಡಿಯುವ ನೀರಿನ ಪೂರೈಕೆಗಾಗಿ ರೂ.88.20 ಕೋಟಿಗಳ ಅಂದಾಜಿಗೆ ಪ್ರಾಧಿಕಾರದಿಂದ ಅನುಮೋದನೆಯಾಗಿದ್ದು, ಬಿಡಬ್ಲ್ಯುಎಸ್‌ಎಸ್‌ಬಿ ವತಿಯಿಂದ ಕಾಮಗಾರಿಗಳನ್ನು ಕೈಗೆತ್ತಿಕೊಂಡು ಪ್ರಗತಿಯಲ್ಲಿರುತ್ತವೆ ಹಾಗೂ ಸದರಿ ಕಾಮಗಾರಿಗಳಿಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವತಿಯಿಂದ ಈಗಾಗಲೇ ಬೆಂಗಳೂರು ಜಲಮಂಡಳಿಗೆ ರೂ.50.43 ಕೋಟಿಗಳ ಹಣವನ್ನು ಪಾವತಿಸಲಾಗಿರುತ್ತದೆ. ಪ್ರಾಧಿಕಾರದ ಹಣಕಾಸಿನ ಲಭ್ಯತೆಯ ಮೇರೆಗೆ ಉಳಿದ ರೂ.37.77 ಕೋಟಿಗಳನ್ನು ಜಲಮಂಡಳಿಗೆ ಪಾವತಿಸಬೇಕಾಗಿರುತ್ತದೆ. ಈವರೆವಿಗೂ ಬನಶಂಕರಿ 6ನೇ ಹಂತದ ಮುಂದುವರೆದ ಬಡಾವಣೆಗೆ ಕಾವೇರಿ ಕುಡಿಯುವ ನೀರು ಕಲ್ಪಿಸುವ ಕೊಳವೆ ಅಳವಡಿಕೆ ಕಾಮಗಾರಿಯು ಶೇಕಡಾ 80ರಷ್ಟು ಕಾಮಗಾರಿ ಪೂರ್ಣಗೊಂಡಿರುತ್ತದೆ.<br>ಮುಂದುವರೆದು, ಒಳಚರಂಡಿ ವ್ಯವಸ್ಥೆಗಾಗಿ ರೂ.164.00 ಕೋಟಿಗಳಿಗೆ ಬೆಂಗಳೂರು ಜಲಮಂಡಳಿಯವರು ಅಂದಾಜಿಸಿ ಸಲ್ಲಿಸಿದ್ದ ಡಿ.ಪಿ.ಆರ್.ಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಸಭೆಯು ಅನುಮೋದನೆ ನೀಡಿದ್ದು, ಸದರಿಯವರಿಗೆ 1/3 ಭಾಗ ಅಂದರೆ ರೂ.54,67,44,985.00 ಗಳನ್ನು ಬಿಡುಗಡೆಗೊಳಿಸುವ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. ಉಳಿದಂತೆ ಬನಶಂಕರಿ 6ನೇ ಹಂತ ಹಾಗೂ ಮುಂದುವರೆದ ಬನಶಂಕರಿ 6ನೇ ಹಂತದ ಬಡಾವಣೆಗಳ ರಸ್ತೆ ಅಭಿವೃದ್ಧಿಗಾಗಿ 100.00 ಕೋಟಿ ರೂ.ಗಳಿಗೆ ಅಂದಾಜು ತಯಾರಿಸಿ ಪ್ರಾಧಿಕಾರದ ಸಭೆಗೆ ಮಂಡಿಸಲಾಗಿದ್ದು, ಅನುಮೋದನೆ ದೊರೆತ ನಂತರ ಪ್ರಾಧಿಕಾರದ ಹಣಕಾಸಿನ ಲಭ್ಯತೆ ಮೇರೆಗೆ ಕಾಮಗಾರಿ ಪ್ರಾರಂಭಿಸಲು ಕ್ರಮವಹಿಸಲಾಗುವುದು. |
| ಆ | ಸದರಿ ಬಡಾವಣೆಗಳ ಟೌನ್ ಪ್ಲಾನ್ ಅಂಗೀಕಾರವಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಅಂಗೀಕಾರವಾಗದಿರಲು ಕಾರಣವೇನು; ಯಾವಾಗ ಅಂಗೀಕರಿಸಿ ಸದರಿ ಬಡಾವಣೆಯನ್ನು ಅಭಿವೃದ್ಧಿ ಪಡಿಸಲಾಗುವುದು; | ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ವಾಜರಹಳ್ಳಿ, ಹೊಸಹಳ್ಳಿ, ಉತ್ತರಹಳ್ಳಿ ಮನವರ್ತ ಕಾವಲ್, ರಘುವನಹಳ್ಳಿ, ತಲಘಟ್ಟಪುರ, ತುರಾಹಳ್ಳಿ, ಗುಬ್ಬಲಾಳ ಗ್ರಾಮ ಮತ್ತು ಕೆಂಗೇರಿ ಹೋಬಳಿ, ಬಡ ಮನವರ್ತೆ ಕಾವಲ್ ಗ್ರಾಮದ ವಿವಿಧ ಸರ್ವೆ ನಂಬರ್ ಗಳಲ್ಲಿ 477 ಎಕರೆ–26 ಗುಂಟೆ ವಿಸ್ತೀರ್ಣದ ಪ್ರದೇಶದಲ್ಲಿ ಪ್ರಾಧಿಕಾರವು ಹಾಲಿ ಕಾರ್ಯಗತ ಮಾಡಿರುವಂತೆ ಮುಂದುವರೆದ ಬನಶಂಕರಿ 6ನೇ ಹಂತ ಬಡಾವಣೆ ನಕ್ಷೆಗೆ ಅನುಮೋದನೆ ನೀಡುವಂತೆ ಅಭಿಯಂತರ ವಿಭಾಗದವರು ಕೋರಿದ್ದರ ಹಿನ್ನೆಲೆಯಲ್ಲಿ ವಿಷಯವನ್ನು ದಿನಾಂಕ 24.08.2013 ರಂದು ನಡೆದ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಸಭೆಯ ವಿಷಯ ಸಂಖ್ಯೆ 148/2013 ರಲ್ಲಿ ಚರ್ಚಿಸಲಾಗಿದ್ದು, ಚರ್ಚೆಯ ನಂತರ ಕೂಲಂಕಷವಾಗಿ ಪರಿಶೀಲಿಸಿ ಸೂಕ್ತ ತೀರ್ಮಾನ ಕೈಗೊಳ್ಳಲು ಮುಂದಿನ ಪ್ರಾಧಿಕಾರದ ಸಭೆಯ ಮುಂದೆ ಪೂರ್ಣ ಮಾಹಿತಿಯೊಂದಿಗೆ ಮಂಡಿಸಲು ನಿರ್ಣಯಿಸಲಾಗಿತ್ತು. |

..2ಕ್ಕೆ

| | | |
|---|---|---|
| | | ದಿನಾಂಕ 07.09.2013 ರಂದು ನಡೆದ ಪ್ರಾಧಿಕಾರದ ಸಭೆಯಲ್ಲಿ ಮುಂದುವರೆದ ಬನಶಂಕರಿ 6ನೇ ಹಂತದ ಬಡಾವಣೆಯನ್ನು ಹಾಲಿ ಕಾರ್ಯಗತ ಮಾಡಿರುವಂತೆ ಯಥಾವತ್ತಾಗಿ ಸ್ಥಿರೀಕರಿಸಲು ಒಟ್ಟಾರೆಯಾಗಿ ತೀರ್ಮಾನಿಸಲಾಗಿರುತ್ತದೆ.<br>ಗುಬ್ಬಲಾಳು ಗ್ರಾಮದ ಸರ್ವೆ ನಂ. 8 ರ ಕೆರೆಯ ಪ್ರದೇಶವನ್ನು ಹೊರತುಪಡಿಸಿ ಉಳಿಕೆ ಜಾಗಕ್ಕೆ ಬಡಾವಣೆ ನಕ್ಷೆಯನ್ನು ಹಾಲಿ ಸ್ಥಳದಲ್ಲಿ ನಿರ್ಮಿಸಿರುವಂತೆ ಈಗಾಗಲೇ ಪ್ರಾಧಿಕಾರದ ಸಭೆಯ ವಿಷಯ ಸಂಖ್ಯೆ 148/2013 ದಿನಾಂಕ 07.09.2013 ರಂದು ತೆಗೆದುಕೊಂಡ ತೀರ್ಮಾನ ಸ್ಥಿರೀಕರಿಸುವ ಬಗ್ಗೆ ದಿನಾಂಕ 05.07.2014 ರಂದು ನಡೆದ ಪ್ರಾಧಿಕಾರದ ಸಭೆಯ ವಿಷಯ ಸಂಖ್ಯೆ 89/2014 ರಲ್ಲಿ ಮಂಡಿಸಿ ಚರ್ಚಿಸಲಾಗಿರುತ್ತದೆ. ಚರ್ಚೆಯ ನಂತರ ಗುಬ್ಬಲಾಳು ಗ್ರಾಮದ ಸರ್ವೆ ನಂ. 8 ಖರಾಬು ಜಾಗವೇ ಇಲ್ಲವೇ ಎಂಬ ಬಗ್ಗೆ ಬೆಂಗಳೂರು ನಗರ ಜಿಲ್ಲಾಧಿಕಾರಿಗಳಿಂದ ಮಾಹಿತಿಯನ್ನು ಕೋರಿದ್ದು, ತ್ವರಿತವಾಗಿ ಕಳುಹಿಸಿಕೊಡುವಂತೆ ಬೆಂಗಳೂರು ನಗರ ಜಿಲ್ಲಾಧಿಕಾರಿಗಳನ್ನು ಕೋರಲು ನಿರ್ಣಯಿಸಲಾಗಿರುತ್ತದೆ. ಅದರಂತೆ ಗುಬ್ಬಲಾಳು ಗ್ರಾಮದ ಸರ್ವೆ ನಂ. 8 ರ ಕೆರೆಯ ಪ್ರದೇಶವು ಖರಾಬು ಜಾಗವೇ ಇಲ್ಲವೇ ಎಂಬ ಬಗ್ಗೆ ಮಾಹಿತಿ ನೀಡಲು ದಿನಾಂಕ 27.08.2014 ರಂದು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಜಿಲ್ಲಾಧಿಕಾರಿಗಳಿಗೆ ಪತ್ರ ಬರೆಯಲಾಗಿರುತ್ತದೆ.<br>ಮುಂದುವರೆದ ಬನಶಂಕರಿ 6ನೇ ಹಂತ 4ನೇ ಹೆಚ್ ಬ್ಲಾಕ್ ಬಡಾವಣೆಯ ಗುಬ್ಬಲಾಳ ಗ್ರಾಮದ ಸರ್ವೆ ನಂ. 8 ರ ಕೆರೆ ಪ್ರದೇಶ ಹಾಗೂ ಸರ್ವೆ ನಂ. 10 ರ ಸರ್ಕಾರಿ ಪ್ರದೇಶ ಮತ್ತು ಇತರೆ ಸರ್ಕಾರಿ ಖರಾಬು ಜಮೀನುಗಳನ್ನು ನಕ್ಷೆಯಿಂದ ಹೊರತುಪಡಿಸಿ ಪರಿಷ್ಕೃತ ನಕ್ಷೆಯೊಂದಿಗೆ ಬಡಾವಣೆ ನಕ್ಷೆ ಅನುಮೋದನೆಗಾಗಿ ಕಾರ್ಯಪಾಲಕ ಅಭಿಯಂತರರು ದಿನಾಂಕ 14.08.2015 ರಂದು ಕೋರಿರುತ್ತಾರೆ. ಸದರಿಯವರು ಸಲ್ಲಿಸಿದ್ದ ಪ್ರಸ್ತಾವನೆಯನ್ನು ಪರಿಶೀಲಿಸಿ ವಿವಿಧ ಸರ್ವೆ ನಂಬರ್ ಗಳಲ್ಲಿರುವ ಖರಾಬು ಪ್ರದೇಶಗಳನ್ನು ಗುರುತಿಸಿ ಖರಾಬು ಪ್ರದೇಶಗಳಲ್ಲಿ ಉದ್ಯಾನವನ / ಬಯಲು ಜಾಗಗಳು, ಸಿಎ ನಿವೇಶನಗಳು ಮತ್ತು ವಸತಿ ನಿವೇಶನಗಳನ್ನು ರಚಿಸಲು ಪ್ರಸ್ತಾಪಿಸಿದ್ದರಿಂದ ಈ ಬಗ್ಗೆ ಮತ್ತೊಮ್ಮೆ ಪರಿಶೀಲಿಸಿ ಸ್ಪಷ್ಟವಾದ ಪರಿಷ್ಕೃತ ನಕ್ಷೆಗಳನ್ನು ಸಲ್ಲಿಸಲು ಹಾಗೂ ಸದರಿ ಖರಾಬು ಪ್ರದೇಶಗಳಲ್ಲಿ ನಿವೇಶನಗಳನ್ನು ರಚಿಸಲು ಅನುಮತಿಯನ್ನು ಜಿಲ್ಲಾಧಿಕಾರಿಗಳಿಂದ ಪಡೆಯುವ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. ಜಿಲ್ಲಾಧಿಕಾರಿಗಳಿಂದ ಅನುಮತಿ ದೊರೆತ ನಂತರ ಸಂಪೂರ್ಣ ವಿವರಗಳನ್ನು ನಕ್ಷೆಯಲ್ಲಿ ಅಳವಡಿಸಿಕೊಂಡು ಅನುಮೋದನೆ ನೀಡಲು ಕ್ರಮ ವಹಿಸಲಾಗುವುದು. |
| ಇ | ಸದರಿ ಬಡಾವಣೆಯಲ್ಲಿನ ರಸ್ತೆಗಳನ್ನು ಬೆಂಗಳೂರು ನೀರು ಸರಬರಾಜು ಸಂಸ್ಥೆ, ಬೆಸ್ಕಾಂ ಮತ್ತು ಟೆಲಿಕಾಂ ಸಂಸ್ಥೆಗಳು ಅಗೆದು ಹಾಳು ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಸದರಿ ರಸ್ತೆಗಳನ್ನು ಸರಿಪಡಿಸಲು ಕೈಗೊಂಡಿರುವ ಕ್ರಮದ ವಿವರಗಳನ್ನು ಒದಗಿಸುವುದು? | ಹೌದು<br>ಬನಶಂಕರಿ 6ನೇ ಹಂತದ ಮುಂದುವರೆದ ಬಡಾವಣೆಗೆ ನೀರಿನ ಕೊಳವೆ ಅಳವಡಿಸಲು ಬೆಂಗಳೂರು ಜಲಮಂಡಳಿಯಿಂದ ಅಗೆಯಲಾದ ರಸ್ತೆಗಳಲ್ಲಿ ಆಗಿಂದಾಗಲೇ ಮೊಟರೆಬಲ್ ಮಾಡಲಾಗಿದೆ. |

..3ಕ್ಕೆ

| | | |
|---|---|---|
| | | ಮುಂದುವರೆದು, ಬನಶಂಕರಿ 6ನೇ ಹಂತ ಮತ್ತು ಮುಂದುವರೆದ ಬನಶಂಕರಿ 6ನೇ ಹಂತದ ಉಳಿಕೆ ರಸ್ತೆಗಳನ್ನು ಅಭಿವೃದ್ಧಿಪಡಿಸಲು 100 ಕೋಟಿ ರೂ.ಗಳಿಗೆ ಅಂದಾಜು ತಯಾರಿಸಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಸಭೆಗೆ ಮಂಡಿಸಲಾಗಿರುತ್ತದೆ. ಸದರಿ ಅಂದಾಜು ಪಟ್ಟಿಗೆ ಪ್ರಾದಿಕಾರದ ಸಭೆಯ ಅನುಮೋದನೆ ದೊರೆತ ನಂತರ ಪ್ರಾಧಿಕಾರದ ಹಣಕಾಸಿನ ಲಭ್ಯತೆ ಮೇರೆಗೆ ಕಾಮಗಾರಿ ಪ್ರಾರಂಭಿಸಲು ಕ್ರಮವಹಿಸಲಾಗುವುದು. |

ಸಂಖ್ಯೆ: ನಅಇ 228 ಬೆಂಭೂಸ್ವಾ 2021

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ